(9)

## ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 463 |
| 2 | ಸದಸ್ಯರ ಹೆಸರು | : | ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : | 16-12-2021 |
| 4 | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಪ್ರಾಥಮಿಕ, ಪ್ರೌಢಶಾಲೆ ಮತ್ತು ಪದವಿ ಪೂರ್ವ ಕಾಲೇಜು, ಪದವಿ ಕಾಲೇಜುಗಳೆಷ್ಟು; (ವಿವರ ನೀಡುವುದು) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ನಡೆಯುತ್ತಿರುವ ಶಾಲಾ ಕಾಲೇಜಿನ ವಿವರಗಳು ಈ ಕೆಳಕಂಡಂತೆ ಇರುತ್ತದೆ. |
| ಆ | ಸದರಿ ಶಾಲಾ ಕಾಲೇಜುಗಳಲ್ಲಿ ಕರ್ತವ್ಯನಿರ್ವಹಿಸುತ್ತಿರುವ ಖಾಯಂ ಬೋಧಕ/ಬೋಧಕೇತರರೆಷ್ಟು; (ವಿವರ ನೀಡುವುದು) | ಸದರಿ ಶಾಲಾ ಕಾಲೇಜುಗಳಲ್ಲಿ ಕರ್ತವ್ಯನಿರ್ವಹಿಸುತ್ತಿರುವ ಖಾಯಂ ಬೋಧಕ/ಬೋಧಕೇತರ ವಿವರಗಳು ಈ ಕೆಳಕಂಡಂತೆ ಇರುತ್ತದೆ. |

**ಅ – ಶಾಲಾ ಕಾಲೇಜಿನ ವಿವರಗಳು**

| ಕ್ರ.ಸಂ. | ಶಾಲಾ ಕಾಲೇಜಿನ ವಿವರಗಳು | ಇರುವ ಸಂಖ್ಯೆಗಳು |
|---|---|---|
| 1. | ಪ್ರಾಥಮಿಕ ಶಾಲೆ | 16 |
| 2. | ಪ್ರೌಢಶಾಲೆ | 33 |
| 3. | ಪದವಿ ಪೂರ್ವ ಕಾಲೇಜು | 15 |
| 4. | ಪದವಿ / ಸ್ನಾತಕೋತ್ತರ ಪದವಿ ಕಾಲೇಜು | 04 |
| | ಒಟ್ಟು | **68** |

**ಪ್ರಾಥಮಿಕ ಶಾಲೆ**

| ಕ್ರ. ಸಂ. | ವಿವರಗಳು | ಕಾರ್ಯನಿರ್ವಹಿಸುತ್ತಿರುವ ಖಾಯಂ ಬೋಧಕ / ಬೋಧಕೇತರ ಸಂಖ್ಯೆ |
|---|---|---|
| 1. | ಮುಖ್ಯ ಶಿಕ್ಷಕರು | 05 |
| 2. | ಸಹ ಶಿಕ್ಷಕರು | 34 |
| 3. | ದೈಹಿಕ ಶಿಕ್ಷಕರು | 05 |
| 4. | ಭೋಧಕೇತರ ಸಿಬ್ಬಂದಿಗಳು | 10 |
| | ಒಟ್ಟು | **54** |

**ಪ್ರೌಢಶಾಲೆ**

| ಕ್ರ. ಸಂ. | ವಿವರಗಳು | ಕಾರ್ಯನಿರ್ವಹಿಸುತ್ತಿರುವ ಖಾಯಂ ಬೋಧಕ / ಬೋಧಕೇತರ ಸಂಖ್ಯೆ |
|---|---|---|
| 1. | ಮುಖ್ಯ ಶಿಕ್ಷಕರು | 17 |
| 2. | ಸಹ ಶಿಕ್ಷಕರು | 36 |
| 3. | ಕರಕುಶಲ | 04 |
| 4. | ಬೋಧಕೇತರ ಸಿಬ್ಬಂದಿಗಳು | 25 |
| | ಒಟ್ಟು | **82** |

**ಪದವಿ ಪೂರ್ವ ಕಾಲೇಜು**

| ಕ್ರ.ಸಂ. | ವಿವರಗಳು | ಕಾರ್ಯನಿರ್ವಹಿಸುತ್ತಿರುವ ಖಾಯಂ ಬೋಧಕ / ಬೋಧಕೇತರ ಸಂಖ್ಯೆ |
|---|---|---|
| 1. | ಪ್ರಾಂಶುಪಾಲರು | 06 |
| 2. | ಉಪನ್ಯಾಸಕರು | 68 |
| 3. | ಬೋಧಕೇತರ ಸಿಬ್ಬಂದಿಗಳು | 15 |
| | ಒಟ್ಟು | **89** |

<table>
<tr>
<td>ಇ</td>
<td>ಸದರಿ ಶಾಲಾ ಕಾಲೇಜುಗಳಲ್ಲಿ ಕರ್ತವ್ಯ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯನಿರ್ವಹಿಸುತ್ತಿರುವ ಬೋಧಕ/ ಬೋಧಕೇತರೆಷ್ಟು; (ವಿವರ ನೀಡುವುದು)</td>
<td>ಸದರಿ ಶಾಲಾ ಕಾಲೇಜುಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಬೋಧಕರ ವಿವರಗಳು ಈ ಕೆಳಕಂಡಂತೆ ಇರುತ್ತದೆ.
<table>
<tr><th>ಕ್ರ.ಸಂ.</th><th>ಶಾಲಾ ಕಾಲೇಜಿನ ವಿವರಗಳು</th><th>ಇರುವ ಸಂಖ್ಯೆಗಳು</th></tr>
<tr><td>1.</td><td>ಪ್ರಾಥಮಿಕ ಶಾಲೆ</td><td>73</td></tr>
<tr><td>2.</td><td>ಪ್ರೌಢಶಾಲೆ</td><td>248</td></tr>
<tr><td>3.</td><td>ಕಂಪ್ಯೂಟರ್ / ಕರಕುಶಲ</td><td>31</td></tr>
<tr><td>4.</td><td>ಪದವಿ ಪೂರ್ವ ಕಾಲೇಜು</td><td>126</td></tr>
<tr><td>5.</td><td>ಪದವಿ ಕಾಲೇಜು</td><td>57</td></tr>
<tr><td>6.</td><td>ಸ್ನಾತಕೋತ್ತರ ಪದವಿ ಕಾಲೇಜು</td><td>06</td></tr>
<tr><td colspan="2">ಒಟ್ಟು</td><td>541</td></tr>
</table>
ಹೊರಗುತ್ತಿಗೆ ಆಧಾರದ ಮೇಲೆ ಯಾರು ಬೋಧಕೇತರ ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿರುವುದಿಲ್ಲ.</td>
</tr>
<tr>
<td>ಈ</td>
<td>ಈ ಶಾಲಾ ಕಾಲೇಜುಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗೆ ಪ್ರತಿ ತಿಂಗಳು ವೇತನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಕಾರಣ ಸಹಿತ ವಿವರ ನೀಡುವುದು)</td>
<td>ಸದರಿ ಶಾಲಾ ಕಾಲೇಜುಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯನಿರ್ವಹಿಸುತ್ತಿರುವ ಸಿಬ್ಬಂದಿಗೆ ಅಕ್ಟೋಬರ್–2021ರ ಮಾಹೆಯವರೆಗೂ ಪಾವತಿ ಮಾಡಲಾಗಿರುತ್ತದೆ. ನವೆಂಬರ್–2021ರ ಮಾಹೆಯ ವೇತನ ಬಿಡುಗಡೆಗೆ ಸಂಬಂಧಿಸಿದಂತೆ ಕಡತವು ವ್ಯವಹರಣೆಯಲ್ಲಿರುತ್ತದೆ.</td>
</tr>
<tr>
<td>ಉ</td>
<td>ಸದರಿ ಹೊರಗುತ್ತಿಗೆ ಆಧಾರದ ಮೇಲೆ ಕರ್ತವ್ಯನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರನ್ನು ಕೋರ್ಟ್ ಆದೇಶದಂತೆ ಖಾಯಂ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ?</td>
<td>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವಿದ್ಯಾ ಇಲಾಖೆಯ ಆಡಳಿತಕ್ಕೊಳಪಟ್ಟಂತೆ, ಒಟ್ಟು 161 ಶಾಲಾ/ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದು, ಸುಮಾರು 615 ಮಂದಿ ಶಿಕ್ಷಕರು / ಉಪನ್ಯಾಸಕರು ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. ಈ ಪೈಕಿ 81 ಶಿಕ್ಷಕರು / ಉಪನ್ಯಾಸಕರುಗಳು ತಮ್ಮನ್ನು ಪಾಲಿಕೆ ಸೇವೆಯಲ್ಲಿ ಖಾಯಂ ಶಿಕ್ಷಕರುಗಳಾಗಿ ವಿಲೀನಗೊಳಿಸುವಂತೆ ಕೋರಿ ಮಾನ್ಯ ಘನ ಉಚ್ಚ ನ್ಯಾಯಾಲಯದಲ್ಲಿ WP Nos. 27420-27424/2016 (S-REG) C/W WP Nos. 11992 & 12025-12099/2015 (S-REG) ರಂತೆ ದಾವೆಯನ್ನು ಹೂಡಿದ್ದರು. ಸದರಿ ಪ್ರಕರಣದ ಮೇಲೆ ಮಾನ್ಯ ಘನ ಉಚ್ಚ ನ್ಯಾಯಾಲಯವು ದಿನಾಂಕ: 28-11-2016 ರಂದು ತೀರ್ಪು ನೀಡಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಕೌನ್ಸಿಲ್ ಸಭೆಯ ತೀರ್ಮಾನದ ವಿಷಯ ಸಂಖ್ಯೆ: 26(210)/2016-17, ದಿನಾಂಕ: 09-08-2016ಅನ್ನು ಸರ್ಕಾರಕ್ಕೆ ಕಳುಹಿಸಿಕೊಡಲು ಬಿಬಿಎಂಪಿಗೆ ನಿರ್ದೇಶನ ನೀಡಿರುತ್ತದೆ ಮತ್ತು ಸರ್ಕಾರವು ಸದರಿ ಸಭೆಯ ನಿರ್ಣಯದ ಮೇಲೆ 4 ತಿಂಗಳ ಒಳಗಾಗಿ ತೀರ್ಮಾನ ತೆಗೆದುಕೊಳ್ಳುವಂತೆ ನಿರ್ದೇಶನ ನೀಡಿತ್ತು.</td>
</tr>
</table>

5

| | | |
|---|---|---|
| | | ಅದರಂತೆ, ಆಯುಕ್ತರು ಬಿಬಿಎಂಪಿರವರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಗಳನ್ನು ಖಾಯಂಗೊಳಿಸಲು ದಿನಾಂಕ: 27-06-2017 ರಂದು ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿದ್ದರು. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ತನ್ನ ಆದೇಶ ಸಂಖ್ಯೆ: ನಅಇ 33 ಎಂಎನ್‌ಜಿ 2017, ದಿನಾಂಕ:07-09-2017 ರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊರಗುತ್ತಿಗೆ ಶಿಕ್ಷಕರ ನೇಮಕಾತಿಯು ಚಾಲ್ತಿಯಲ್ಲಿರುವ ಸರ್ಕಾರದ ನಿಯಮಾವಳಿಗಳಿಗೆ ವಿರುದ್ಧವಾಗಿದ್ದ ಹಿನ್ನೆಲೆಯಲ್ಲಿ ಸದರಿ ಪ್ರಸ್ತಾವನೆಯನ್ನು ತಿರಸ್ಕರಿಸಲಾಗಿರುತ್ತದೆ.<br><br>ಪ್ರಸ್ತುತ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯ ಪ್ರಾಥಮಿಕ, ಪ್ರೌಢಶಾಲೆಗಳಲ್ಲಿ ಖಾಲಿ ಇರುವ ಬೋಧಕ ಸಿಬ್ಬಂದಿ ಹುದ್ದೆಗಳನ್ನು ಭರ್ತಿ ಮಾಡುವ ಕುರಿತಂತೆ ಘನ ನ್ಯಾಯಾಲಯದ ಆದೇಶದ ಹಿನ್ನಲೆಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಸದರಿ ಬೋಧಕ ಸಿಬ್ಬಂದಿಗೆ ಸೇವಾವಧಿಯನ್ನು ಪರಿಗಣಿಸಲು ಕೃಪಾಂಕಗಳನ್ನು ನೀಡಿ ನೇಮಕಾತಿ ಪ್ರಕ್ರಿಯೆ ನಡೆಸಲು ಕರಡು ವಿಶೇಷ ನೇಮಕಾತಿ ನಿಯಮಗಳನ್ನು ರಚಿಸಿ ಸರ್ಕಾರದ ಅನುಮೋದನೆಗೆ ಸಲ್ಲಿಸಲು ಕ್ರಮವಹಿಸಲಾಗುತ್ತಿದೆ ಎಂದು ಮುಖ್ಯ ಆಯುಕ್ತರು, ಬಿಬಿಎಂಪಿ ಇವರು ವರದಿ ಮಾಡಿದ್ದು, ಅದರಂತೆ ಮುಖ್ಯ ಆಯುಕ್ತರು, ಬಿ.ಬಿ.ಎಂ.ಪಿ.ಯವರು ಈ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದರೇ ಸದರಿ ಪ್ರಸ್ತಾವನೆಯನ್ನು ನಿಯಮಾನುಸಾರ ಪರಿಶೀಲಿಸಿ ಮುಂದಿನ ಸೂಕ್ತ ಕ್ರಮ ಕೈಗೊಳ್ಳಲಾಗುವುದು. |

**ನಅಇ 232 ಎಂಎನ್‌ಜಿ 2021**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ